# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 751
ಸದಸ್ಯರ ಹೆಸರು : ಡಾ: ವೈ.ಎ ನಾರಾಯಣಸ್ವಾಮಿ
ಉತ್ತರಿಸುವ ದಿನಾಂಕ : 17.09.2021.
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖೆಯಲ್ಲಿ ಡಾ: ಅಂಬೇಡ್ಕರ್ ನಿಗಮದ ಅಡಿಯಲ್ಲಿ "ಭೂ ಖರೀದಿ ಯೋಜನೆ" (ಎಲ್.ಪಿ.ಎಸ್) ಯೋಜನೆ ಜಾರಿಯಲ್ಲಿದೆಯೇ; ಹಾಗಿದ್ದಲ್ಲಿ ಇದರ ಮಹತ್ವವೇನು; | ಪರಿಶಿಷ್ಟ ಜಾತಿಗೆ ಸೇರಿದ ಭೂ ರಹಿತ ಕೃಷಿ ಕಾರ್ಮಿಕರ ಕುಟುಂಬದ ಮಹಿಳೆಯರಿಗೆ ಖಾಸಗಿಯವರಿಂದ ಜಮೀನನ್ನು ಖರೀದಿಸಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಜಿಲ್ಲಾ ಸಮಿತಿಯಲ್ಲಿ ದರ ಅನುಮೋದನೆ ಪಡೆದು ನೇರವಾಗಿ ಫಲಾಪೇಕ್ಷಿಗಳಿಗೆ ಜಮೀನನ್ನು ನೊಂದಣಿ ಮಾಡಿಸಿ ಪರಿಶಿಷ್ಟ ಜಾತಿಯ ಕುಟುಂಬಗಳನ್ನು ಭೂ ಒಡೆಯರನ್ನಾಗಿಸಲು ಭೂ ಒಡೆತನ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದೆ.<br><br>ಈ ಯೋಜನೆಯು ನಿಗಮದ ಪ್ರತಿಷ್ಠಿತ ಯೋಜನೆಗಳಲ್ಲಿ ಒಂದಾಗಿದೆ. ಸದರಿ ಯೋಜನೆಯಡಿ ಖರೀದಿಸಿ ಕೊಡುವ ಜಮೀನು ಸ್ಥಿರಾಸ್ತಿಯಾಗಿರುವುದರಿಂದ ಫಲಾನುಭವಿಯ ಕುಟುಂಬಕ್ಕೆ ಒಂದು ಶಾಶ್ವತ ಸ್ವತ್ತಾಗಿರುತ್ತದೆ. ರೂ.15.00 ಲಕ್ಷಗಳ ಘಟಕ ವೆಚ್ಚದಲ್ಲಿ (ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ, ರಾಮನಗರ ಘಟಕ ವೆಚ್ಚ ರೂ.20.00 ಲಕ್ಷ) ಲಭ್ಯವಾಗುವ ಜಮೀನನ್ನು ಖರೀದಿಸಿ ನೊಂದಣಿ ಮಾಡಲಾಗುವುದು. |
| ಆ) | ಕಳೆದ 5 ವರ್ಷಗಳಲ್ಲಿ ಈ ಯೋಜನೆ ಅಡಿಯಲ್ಲಿ ಖರೀದಿಸಿರುವ ಜಮೀನು ಎಷ್ಟು; ಫಲಾನುಭವಿಗಳಿಗೆ ಹಂಚಿಕೆ ಆಗಿರುವ ಜಮೀನು ಎಷ್ಟು; ಹಾಗೂ ಈ ಯೋಜನೆಗೆ ಸರ್ಕಾರ ಭರಿಸಿರುವ ವೆಚ್ಚವೆಷ್ಟು; (ತಾಲ್ಲೂಕುವಾರು/ ಜಿಲ್ಲಾವಾರು ವಿವರ ನೀಡುವುದು) | ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಿದೆ. |
| ಇ) | ಮೇಲ್ಕಂಡ ಭೂ ಖರೀದಿಯಲ್ಲಿ ಆಗಿರುವ ಅವ್ಯವಹಾರಗಳ ಮಾಹಿತಿಯನ್ನು ಜಿಲ್ಲಾವಾರು ನೀಡುವುದು; | 1. ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಮಲ್ಲಿಗೆ ಮಡು ಗ್ರಾಮದ ಸರ್ವೆ ನಂ:126/ಆ ಭೂಮಿಯ ಗುಣಮಟ್ಟದ ಬಗ್ಗೆ ಸುಳ್ಳು ವರದಿ ಸಲ್ಲಿಸಿ ಫಲವತ್ತತೆ ಇಲ್ಲದ ಭೂಮಿಯನ್ನು ನೊಂದಣಿ ಮಾಡಿಸಿರುವ ಬಗ್ಗೆ ಜಿಲ್ಲಾ ವ್ಯವಸ್ಥಾಪಕರು ಹಾಗೂ ಬೇರೆ ಭೂಮಿ ತೋರಿಸಿ ವಂಚಿಸಿರುವ ಭೂ ಮಾಲೀಕರು ಹಾಗೂ ಇತರೆ ಜನರ ವಿರುದ್ಧ ಮಾನ್ವಿ ಪೋಲೀಸ್ ಠಾಣೆಯಲ್ಲಿ 06 ಜನರ ಮೇಲೆ ಮೊಕದ್ದಮೆ ಸಂಖ್ಯೆ:0049/2020 ದಿನಾಂಕ:09.03.2021 ರಂದು ಪ್ರಕರಣ ದಾಖಲಾಗಿರುತ್ತದೆ. |

| | | |
|---|---|---|
| | | 2. ವಿಜಯಪುರ ಜಿಲ್ಲೆ/ತಾಲ್ಲೂಕಿನ ಹೊಕ್ಕುಂಡಿ ಗ್ರಾಮದ ಸರ್ವೆ ನಂ:107/2 ರಲ್ಲಿ 9.10 ಎಕರೆ. 107/3 ರಲ್ಲಿ 9.11 ಎಕರೆ ಭೂಮಿ ಮಂಜೂರಾತಿ ಪಡೆದು ನೊಂದಣಿ ಆಗಿದೆ. ಫಲಾನುಭವಿಗಳು ಸ್ಥಳೀಯರು ಅಲ್ಲದಿದ್ದರೂ ಸ್ಥಳೀಯರಂತೆ ಸುಳ್ಳು ದಾಖಲಾತಿಗಳನ್ನು ಸೃಷ್ಟಿಸಿ ಸೌಲಭ್ಯ ಪಡೆದಿರುವ ಬಗ್ಗೆ ಒಟ್ಟು 09 ಫಲಾನುಭವಿಗಳ ವಿರುದ್ಧ ಜಲನಗರ ಠಾಣೆ ವಿಜಯಪುರ ಇಲ್ಲಿ ಮೊಕದ್ದಮೆ ಸಂಖ್ಯೆ:0053/2020. ದಿನಾಂಕ:26.05.2020 ರಂದು ಪ್ರಕರಣ ದಾಖಲಾಗಿದೆ. ಜಮೀನು ಹಿಂಪಡೆಯಲು ಉಪ ವಿಭಾಗಾಧಿಕಾರಿಯವರ ನ್ಯಾಯಲಯ ವಿಜಯಪುರ ಇಲ್ಲಿ ವಿಚಾರಣೆ ನಡೆಯುತ್ತಿದೆ. |
| ಈ) | ಅವ್ಯವಹಾರಗಳಲ್ಲಿ ಭಾಗಿಯಾಗಿರುವ ಅಧಿಕಾರಿ/ ಸಿಬ್ಬಂದಿಗಳು ಯಾರ್ಯಾರು: (ಹುದ್ದೆ ಸಹಿತ ವಿವರ ನೀಡುವುದು) ಸದರಿಯವರ ಮೇಲೆ ತೆಗೆದುಕೊಳ್ಳಲಾದ ಕ್ರಮಗಳೇನು: (ವಿವರ ನೀಡುವುದು) | ಅನುಬಂಧ-2ರಲ್ಲಿ ನೀಡಿದೆ. |

**ಸಂಖ್ಯೆ: ಸಕಇ 430 ಎಸ್‌ಡಿಸಿ 2021**

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು.

# ಅನುಬಂಧ-1

## ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

| ಕ್ರ. ಸಂ | ಜಿಲ್ಲೆಯ ಹೆಸರು | 2016-17 | | | 2017-18 | | | 2018-19 | | | 2019-20 | | | 2020-21 | | |
|---|---|---|---|---|---|---|---|---|---|---|---|---|---|---|---|---|
| | | ಖರೀದಿಸಿದ ಒಟ್ಟು ವಿಸ್ತೀರ್ಣ (ಎಕರೆಗಳಲ್ಲಿ) | ಫಲಾನುಭವಿಗಳಿಗೆ ಹಂಚಿಕೆ ಆಗಿರುವ ಜಮೀನಿನ ವಿಸ್ತೀರ್ಣ (ಎಕರೆಗಳಲ್ಲಿ) | ಭರಿಸಿದ ವೆಚ್ಚ (ಲಕ್ಷಗಳಲ್ಲಿ) | ಖರೀದಿಸಿದ ಒಟ್ಟು ವಿಸ್ತೀರ್ಣ (ಎಕರೆಗಳಲ್ಲಿ) | ಫಲಾನುಭವಿಗಳಿಗೆ ಹಂಚಿಕೆ ಆಗಿರುವ ಜಮೀನಿನ ವಿಸ್ತೀರ್ಣ (ಎಕರೆಗಳಲ್ಲಿ) | ಭರಿಸಿದ ವೆಚ್ಚ (ಲಕ್ಷಗಳಲ್ಲಿ) | ಖರೀದಿಸಿದ ಒಟ್ಟು ವಿಸ್ತೀರ್ಣ (ಎಕರೆಗಳಲ್ಲಿ) | ಫಲಾನುಭವಿಗಳಿಗೆ ಹಂಚಿಕೆ ಆಗಿರುವ ಜಮೀನಿನ ವಿಸ್ತೀರ್ಣ (ಎಕರೆಗಳಲ್ಲಿ) | ಭರಿಸಿದ ವೆಚ್ಚ (ಲಕ್ಷಗಳಲ್ಲಿ) | ಖರೀದಿಸಿದ ಒಟ್ಟು ವಿಸ್ತೀರ್ಣ (ಎಕರೆಗಳಲ್ಲಿ) | ಫಲಾನುಭವಿಗಳಿಗೆ ಹಂಚಿಕೆ ಆಗಿರುವ ಜಮೀನಿನ ವಿಸ್ತೀರ್ಣ (ಎಕರೆಗಳಲ್ಲಿ) | ಭರಿಸಿದ ವೆಚ್ಚ (ಲಕ್ಷಗಳಲ್ಲಿ) | ಖರೀದಿಸಿದ ಒಟ್ಟು ವಿಸ್ತೀರ್ಣ (ಎಕರೆಗಳಲ್ಲಿ) | ಫಲಾನುಭವಿಗಳಿಗೆ ಹಂಚಿಕೆ ಆಗಿರುವ ಜಮೀನಿನ ವಿಸ್ತೀರ್ಣ (ಎಕರೆಗಳಲ್ಲಿ) | ಭರಿಸಿದ ವೆಚ್ಚ (ಲಕ್ಷಗಳಲ್ಲಿ) |
| 1 | ಬೆಂಗಳೂರು(ಗ್ರಾ) | 1.02 | 1.02 | 10.00 | 0.00 | 0.00 | 0.00 | 0.00 | 0.00 | 0.00 | 2.00 | 2.00 | 40.00 | 2.00 | 1.00 | 20.00 |
| 2 | ಬೆಂಗಳೂರು (ನ) | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 3 | ಚಿಕ್ಕಬಳ್ಳಾಪುರ | 46.22 | 104.38 | 554.90 | 60.21 | 46.13 | 246.66 | 0.00 | 11.10 | 43.82 | 10.01 | 8.01 | 45.12 | 31.17 | 20.05 | 147.44 |
| 4 | ಚಿತ್ರದುರ್ಗ | 22.00 | 6.00 | 13.98 | 44.32 | 27.02 | 119.94 | 0.00 | 7.33 | 25.82 | 10.00 | 20.00 | 130.18 | 0.00 | 0.00 | 0.00 |
| 5 | ದಾವಣಗೆರೆ | 3.35 | 1.35 | 3.66 | 19.16 | 11.22 | 45.06 | 0.00 | 4.00 | 17.28 | 28.37 | 0.00 | 0.00 | 0.00 | 25.37 | 119.26 |
| 6 | ಕೋಲಾರ | 22.21 | 17.12 | 73.36 | 39.14 | 33.17 | 136.42 | 0.00 | 0.00 | 0.00 | 0.00 | 0.00 | 0.00 | 1.00 | 0.00 | 0.00 |
| 7 | ರಾಮನಗರ | 11.00 | 9.00 | 50.00 | 6.24 | 5.30 | 33.12 | 0.00 | 2.34 | 42.76 | 0.00 | 0.00 | 0.00 | 7.10 | 0.00 | 0.00 |
| 8 | ಶಿವಮೊಗ್ಗ | 0.00 | 5.00 | 14.62 | 0.00 | 1.00 | 6.30 | 1.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 9 | ತುಮಕೂರು | 6.07 | 6.11 | 15.74 | 12.00 | 5.39 | 31.88 | 0.00 | 0.00 | 0.00 | 27.13 | 19.50 | 83.26 | 6.05 | 4.10 | 29.76 |
| 10 | ಬಾಗಲಕೋಟೆ | 130.01 | 79.29 | 762.92 | 323.12 | 220.25 | 2080.92 | 43.05 | 167.07 | 1658.52 | 652.16 | 395.61 | 4909.80 | 419.35 | 477.84 | 5772.96 |
| 11 | ಬೆಳಗಾವಿ | 52.30 | 28.00 | 169.30 | 112.33 | 79.01 | 560.90 | 46.08 | 49.17 | 279.54 | 149.16 | 101.76 | 1102.04 | 180.16 | 136.57 | 1522.24 |
| 12 | ಬಿಜಾಪುರ | 89.20 | 73.13 | 444.48 | 274.37 | 173.16 | 1220.46 | 3.00 | 83.30 | 555.28 | 283.02 | 220.00 | 1554.56 | 180.18 | 215.56 | 1360.92 |
| 13 | ಧಾರವಾಡ | 25.03 | 18.00 | 51.00 | 22.31 | 23.20 | 94.28 | 10.03 | 6.15 | 29.84 | 73.13 | 34.34 | 163.26 | 2.00 | 28.08 | 128.94 |
| 14 | ಗದಗ | 69.13 | 51.11 | 194.22 | 232.36 | 169.17 | 687.66 | 5.31 | 76.13 | 329.20 | 48.08 | 26.94 | 146.00 | 79.12 | 41.45 | 211.26 |
| 15 | ಹಾವೇರಿ | 26.21 | 0.39 | 5.32 | 11.00 | 23.14 | 63.82 | 2.01 | 5.13 | 20.18 | 7.21 | 7.21 | 42.00 | 4.07 | 2.00 | 8.10 |
| 16 | ಉತ್ತರ ಕನ್ನಡ | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 17 | ಬಳ್ಳಾರಿ | 18.36 | 13.00 | 109.20 | 51.36 | 51.12 | 396.40 | 1.00 | 10.03 | 69.14 | 65.00 | 34.35 | 400.66 | 3.64 | 10.97 | 124.22 |
| 18 | ಬೀದರ್ | 13.00 | 8.00 | 36.72 | 57.25 | 28.06 | 138.20 | 4.00 | 26.14 | 125.74 | 0.00 | 0.00 | 0.00 | 23.08 | 0.00 | 0.00 |
| 19 | ಗುಲ್ಬರ್ಗಾ | 551.31 | 457.15 | 1593.48 | 270.19 | 345.02 | 1166.34 | 76.36 | 96.30 | 621.70 | 261.15 | 113.75 | 671.90 | 773.33 | 588.38 | 3411.06 |
| 20 | ಕೊಪ್ಪಳ | 0.00 | 0.00 | 0.00 | 202.35 | 209.38 | 806.36 | 1.32 | 1.32 | 5.18 | 0.00 | 0.00 | 0.00 | 48.34 | 62.26 | 235.76 |
| 21 | ರಾಯಚೂರು | 84.34 | 131.12 | 1003.50 | 683.16 | 512.38 | 4321.30 | 9.00 | 95.24 | 756.72 | 167.23 | 54.40 | 745.54 | 626.15 | 342.98 | 3768.40 |
| 22 | ಯಾದಗಿರಿ | 127.25 | 38.05 | 318.76 | 156.17 | 114.38 | 1036.60 | 183.37 | 202.22 | 1693.84 | 28.23 | 71.37 | 597.16 | 438.06 | 120.36 | 1091.32 |
| 23 | ಚಾಮರಾಜನಗರ | 9.17 | 28.07 | 93.76 | 90.03 | 84.08 | 446.40 | 8.37 | 8.09 | 24.94 | 20.12 | 14.02 | 101.14 | 12.31 | 14.92 | 100.30 |
| 24 | ಚಿಕ್ಕಮಗಳೂರು | 6.00 | 4.00 | 18.80 | 0.00 | 5.16 | 16.20 | 0.00 | 0.00 | 0.00 | 4.27 | 2.30 | 10.40 | 2.40 | 3.77 | 63.20 |
| 25 | ದಕ್ಷಿಣ ಕನ್ನಡ | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 26 | ಹಾಸನ | 5.35 | 5.35 | 12.94 | 0.00 | 4.35 | 10.14 | 0.00 | 0.00 | 0.00 | 0.00 | 0.00 | 0.00 | 11.04 | 6.43 | 57.90 |
| 27 | ಕೊಡಗು | 3.30 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 1.30 | 3.90 |
| 28 | ಮಂಡ್ಯ | 12.05 | 2.38 | 20.24 | 9.15 | 14.35 | 172.32 | 6.02 | 5.26 | 78.56 | 5.10 | 4.70 | 108.94 | 9.17 | 9.23 | 144.70 |
| 29 | ಮೈಸೂರು | 8.04 | 6.14 | 32.36 | 28.35 | 23.13 | 139.00 | 0.00 | 20.08 | 106.80 | 18.18 | 6.41 | 67.56 | 31.70 | 30.84 | 321.18 |
| 30 | ಉಡುಪಿ | 0.00 | 0.00 | 0.00 | 0.26 | 0.00 | 0.00 | 0.00 | 0.00 | 0.00 | 1.37 | 0.00 | 0.00 | 0.00 | 0.00 | 0.00 |
| | ಒಟ್ಟು | 1341.92 | 1093.16 | 5603.26 | 2704.83 | 2208.57 | 13976.68 | 399.92 | 876.40 | 6484.86 | 1860.92 | 1136.67 | 10919.52 | 2891.42 | 2143.46 | 18642.22 |

## ಅನುಬಂಧ-2

**ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಮಲ್ಲಿಗಮಡು ಗ್ರಾಮದ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಅಕ್ರಮಕ್ಕೆ ಕಾರಣರಾದ ಈ ಕೆಳಕಂಡವರ ಮೇಲೆ ಮೊಕದ್ದಮೆ ದಾಖಲಿಸಲಾಗಿದೆ.**

1. ಶ್ರೀ ವೈ.ಎ.ಕಾಳೆ, ಹಿಂದಿನ ಜಿಲ್ಲಾ ವ್ಯವಸ್ಥಾಪಕರು, ಡಾ:ಬಿ.ಆರ್ ಅಂಬೇಡ್ಕರ್ ಅಭಿವೃದ್ಧಿ ನಿಗಮ, ರಾಯಚೂರು ಜಿಲ್ಲೆ.
2. ಶ್ರೀ ಅಮರಪ್ಪ ಬಿನ್ ಬಸನಗೌಡ, ಲಿಂಗಾಯತ್, ಮಲ್ಲಿಗಮಡು. ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ. (ಭೂ ಮಾಲೀಕರು)
3. ಶ್ರೀಮತಿ ಪದ್ಮಪ್ಪ ದೊಡ್ಡನಗೌಡ ಲಿಂಗಾಯತ್, ಮಲ್ಲಿಗಮಡು, ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ. (ಭೂ ಮಾಲೀಕರು)
4. ಶ್ರೀ ಬಸನಗೌಡ ಬಿನ್ ಶರಣಪ್ಪಗೌಡ ಲಿಂಗಾಯತ್, ಮಲ್ಲಿಗಮಡು, ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ. (ಭೂ ಮಾಲೀಕರು)
5. ಶ್ರೀ ಪ್ರಕಾಶ ಬಿನ್ ದೊಡ್ಡನಗೌಡ ಲಿಂಗಾಯತ್, ಮಲ್ಲಿಗಮಡು, ಮಾನ್ವಿ ತಾಲ್ಲೂಕು, ರಾಯಚೂರು. (ಭೂ ಮಾಲೀಕರು)
6. ಶ್ರೀ ಬಸನಗೌಡ ಬಿನ್ ದೊಡ್ಡನಗೌಡ ಲಿಂಗಾಯತ್, ಮಲ್ಲಿಗಮಡು, ಮಾನ್ವಿ ತಾಲ್ಲೂಕು, ರಾಯಚೂರು. (ಭೂ ಮಾಲೀಕರು)

**ವಿಜಯಪುರ ಜಿಲ್ಲೆಯ ಅರ್ಜುಣಗಿ ಗ್ರಾಮದ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಅಕ್ರಮಕ್ಕೆ ಕಾರಣರಾದ ಈ ಕೆಳಕಂಡ ಫಲಾನುಭವಿಗಳ ವಿರುದ್ಧ ಮೊಕದ್ದಮೆ ದಾಖಲಿಸಲಾಗಿದೆ.**

1. ಶ್ರೀಮತಿ ಶಾಂತಾಬಾಯಿ ರಾಮಣ್ಣ ಹರಿಜನ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
2. ಶ್ರೀಮತಿ ಶಾಲಾ ಸದಾಶಿವ ಹರಿಜನ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
3. ಶ್ರೀಮತಿ ಶ್ರೀದೇವಿ ಮಹಾದೇವ ಹರಿಜನ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
4. ಶ್ರೀಮತಿ ಮಾಲಾ(ಮಲೆಪ್ಪ) ಮಹಾದೇವ ಶೆಳ್ಳೆನಣ್ಣವರ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
5. ಶ್ರೀಮತಿ ದುರ್ಗಪ್ಪ ಹಣಮಂತ ಹರಿಜನ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
6. ಶ್ರೀಮತಿ ಅಮಜಪ್ಪ ಸಿದ್ದಪ್ಪ ಹರಿಜನ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
7. ಶ್ರೀಮತಿ ಅನ್ನಪೂರ್ಣ ದುರ್ಗಪ್ಪ ಹರಿಜನ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
8. ಶ್ರೀಮತಿ ದುರ್ಗಪ್ಪ ತಂದೆ ಗಂಗಪ್ಪ ಹರಿಜನ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.
9. ಶ್ರೀಮತಿ ಐರಾವತಿ ಕಾಮಣ್ಣ ಮಹಾರ, ಅರ್ಜುಣಗಿ ಗ್ರಾಮ, ಬಬಲೇಶ್ವರ ತಾಲ್ಲೂಕು, ವಿಜಯಪುರ ಜಿಲ್ಲೆ.